

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 79 |
| ಸದಸ್ಯರ ಹೆಸರು | : | ಶ್ರೀ ಪ್ರಾಣೇಶ್ ಎಂ.ಕೆ |
| ಉತ್ತರಿಸುವ ದಿನಾಂಕ | : | 15/07/2019 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಧನಹಕ್ಕಿಹಾರದ ಗಿರಿಜನರ ಹಾಡಿಗೆ ಸಮಾಜ ಕಲ್ಯಾಣ ಇಲಾಖೆ ಸಚಿವರು ಭೇಟಿ ನೀಡಿದಾಗ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗೆ ಘೋಷಣೆ ಮಾಡಿದ ಅನುದಾನವೆಷ್ಟು ಹಾಗೂ ಯಾವ ವರ್ಷ ಮಾಡಲಾಗಿದೆ (ವಿವರ ನೀಡುವುದು)</td><td>ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಧನಹಕ್ಕಿಹಾರದ ಗಿರಿಜನರ ಹಾಡಿಗೆ ಹಿಂದಿನ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ದಿನಾಂಕ:15.04.2015ರಂದು ಭೇಟಿ ನೀಡಿದ ಸಂದರ್ಭದಲ್ಲಿ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ರೂ.10.00 ಕೋಟಿಗಳ ವಿಶೇಷ ಪ್ಯಾಕೇಜ್ ಅನ್ನು ಘೋಷಿಸಿರುತ್ತಾರೆ.</td></tr>
<tr><td>ಆ)</td><td>ಈ ಅನುದಾನವನ್ನು ಮೂಡಿಗೆರೆ ತಾಲ್ಲೂಕಿನ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಯಾವ ಯಾವ ಕಾಮಗಾರಿಗಳಿಗೆ ಹಂಚಿಕೆ ಮಾಡಲಾಗಿದೆ (ವಿವರ ನೀಡುವುದು)</td><td>ಮೂಡಿಗೆರೆ ತಾಲ್ಲೂಕಿನಲ್ಲಿ ಒಟ್ಟು 167 ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕ್ರಿಯಾಯೋಜನೆಯನ್ನು ರೂಪಿಸಲಾಗಿದ್ದು, ವಿವರ ಈ ಕೆಳಕಂಡಂತಿದೆ.<br>1. ಸಿ.ಸಿ. ರಸ್ತೆ ಮತ್ತು ರಸ್ತೆ ದುರಸ್ತಿ -143 ಕಾಮಗಾರಿಗಳು .<br>2. ಜಿ.ಎಲ್.ಎಸ್.ಆರ್. ಟ್ಯಾಂಕ್ ನಿರ್ಮಾಣ-1 ಕಾಮಗಾರಿ.<br>3. ಬಾಕ್ಸ್ ಚರಂಡಿ-15 ಕಾಮಗಾರಿಗಳು.<br>4. ತಡೆಗೋಡೆ ನಿರ್ಮಾಣ-3 ಕಾಮಗಾರಿಗಳು.<br>5. ಕುಡಿಯುವ ನೀರು-3 ಕಾಮಗಾರಿಗಳು.<br>6. ಮೋರಿ ನಿರ್ಮಾಣ-1 ಕಾಮಗಾರಿ.<br>7. ಕಾಲುಸಂಕ-1 ಕಾಮಗಾರಿ.</td></tr>
<tr><td>ಇ)</td><td>ಜಿಲ್ಲೆಯಲ್ಲಿ ಅನುದಾನ ಹಂಚಿಕೆ ಮಾಡುವ ಸಂದರ್ಭದಲ್ಲಿ ಸರ್ಕಾರಿ ಆದೇಶವನ್ನು ಪಾಲನೆ ಮಾಡಲಾಗಿದೆಯೇ (ವಿವರ ನೀಡುವುದು)</td><td>ಸರ್ಕಾರದ ಆದೇಶ ಸಂಖ್ಯೆ ಸಕಇ 277 ಪವಯೋ 2016 ದಿನಾಂಕ: 07.12.2016 ರನ್ವಯ ಈ ಕೆಳಕಂಡಂತೆ ಅನುದಾನ ಹಂಚಿಕೆ ಮಾಡಲಾಗಿದೆ.
<table>
<tr><th>ಕ್ರ ಸಂ</th><th>ಕಾರ್ಯಕ್ರಮ</th><th>ಶೇ.ವಾರು ಪ್ರಮಾಣ</th></tr>
<tr><td>1.</td><td>ವಸತಿ</td><td>10%</td></tr>
<tr><td>2.</td><td>ಸಂಪರ್ಕ ರಸ್ತೆ</td><td>25%</td></tr>
<tr><td>3.</td><td>ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ</td><td>25%</td></tr>
<tr><td>4.</td><td>ಕುಡಿಯುವ ನೀರಿನ ಸರಬರಾಜು</td><td>10%</td></tr>
<tr><td>5.</td><td>ನೀರು ಶುದ್ಧೀಕರಣ ಘಟಕ</td><td>10%</td></tr>
<tr><td>6.</td><td>ಸೋಲಾರ್ ಬೀದಿ ದೀಪ</td><td>5%</td></tr>
<tr><td>7.</td><td>ಕೃಷಿನೀರಾವರಿ/ಬದೂ</td><td>10%</td></tr>
</table></td></tr>
</table>

| | | |
|---|---|---|
| | | ನಿರ್ಮಾಣ<br>8. ಭೂಮಿ ಸಮತಟ್ಟು 5% |
| ಈ). | ಹಂಚಿಕೆಯಾದ ಅನುದಾನಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆಯೇ: ಹಾಗಿದ್ದಲ್ಲಿ, ಯಾವ ಆಧಾರದ ಮೇಲೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ: (ವಿವರ ನೀಡುವುದು) | ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ, ಅವರ ಹಂತದಲ್ಲಿಯೇ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. |
| ಉ) | ಈ ಅನುದಾನ ಹಂಚಿಕೆ ಮಾಡುವ ಸಂದರ್ಭದಲ್ಲಿ ಜನಪ್ರತಿನಿಧಿಗಳ ಗಮನಕ್ಕೆ ತರಲಾಗಿದೆಯೇ: ಹಾಗಾದಲ್ಲಿ ಯಾವಾಗ ತರಲಾಗಿದೆ: (ವಿವರ ನೀಡುವುದು) | ಹಿಂದಿನ ಸಚಿವರಿಗೆ ಸ್ಥಳೀಯ ಜನಪ್ರತಿನಿಧಿಗಳು ಸಲ್ಲಿಸಿರುವ ಪ್ರಸ್ತಾವನೆಗಳ ಆಧಾರದ ಮೇಲೆ ಅನುದಾನ ಹಂಚಿಕೆ ಮಾಡಲಾಗಿದೆ. |
| ಊ) | ಬಿಡುಗಡೆಯಾದ ಅನುದಾನವನ್ನು ಸಮರ್ಪಕವಾಗಿ ಬಳಕೆ ಮಾಡಲಾಗಿದೆಯೇ (ವಿವರ ನೀಡುವುದು). | ಕ್ರಿಯಾಯೋಜನೆಯಲ್ಲಿ ಅನುಮೋದನೆಗೊಂಡಿರುವ 167 ಕಾಮಗಾರಿಗಳಲ್ಲಿ 95 ಕಾಮಗಾರಿಗಳು ಪೂರ್ಣಗೊಂಡಿದ್ದು, ಇವುಗಳಿಗೆ ರೂ.4,71,85,000/-ಗಳನ್ನು ವೆಚ್ಚ ಮಾಡಲಾಗಿದೆ. ಬಾಕಿ ಕಾಮಗಾರಿಗಳು ಪ್ರಗತಿ ಹಂತದಲ್ಲಿರುತ್ತವೆ. |

ಸಕಇ 40 ಎಸ್ ಟಿ ಪಿ 2019

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು.